# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್.

ರಿಜಿಸ್ಟರ್ಡ್ ನಂ. ಆರ್ ಎನ್ ...

5ನೇ ವರ್ಷ 1ನೇ ಸಂಚಿಕೆ ಕೊಪ್ಪ 17-8-986 ... 20 ಪೈಸೆ




## ಒಂದು ಪತ್ರ: ಪ್ರಜಾತಂತ್ರದಲ್ಲಿ ಟೀಕೆ, ಆಕ್ಷೇಪ, ಇತ್ಯಾದಿ........

ಕೊಪ್ಪದ ಸದ್ಯದ ಪರಿಸ್ಥಿತಿಯನ್ನು ಅವಲೋಕಿಸಿದಾಗ ಯಾರೋ ಕರಪತ್ರಗಳನ್ನು ಹಂಚುವ ಮುಖಾಂತರ ಪುರಸಭಾ ಅಧ್ಯಕ್ಷರು ಮತ್ತು ಸದಸ್ಯರುಗಳ ತೇಜೋವಧೆ ಮಾಡಲು ಹೊರಟಿರುವುದು ಖಂಡನಾರ್ಹ. ಇವರೆಲ್ಲರೂ ನಾವೇ ಆರಿಸಿದ ನಮ್ಮ ಪ್ರತಿನಿಧಿಗಳು ಎಂಬುದನ್ನು ನಾವು ಮರೆಯದೆ ಅವರು ತಪ್ಪಿದಾಗ ಅದನ್ನು ನೇರವಾಗಿ ಪತ್ರ ಮುಖಾಂತರವಾಗಲಿ ಅಥವಾ ಪತ್ರಿಕೆಗಳ ಮುಖಾಂತರವಾಗಲೀ ಅವರ ಗಮನಕ್ಕೆ ತಂದು, ಆಗಲೂ ಸಹ ನ್ಯಾಯ ದೊರಕದಿದ್ದಲ್ಲಿ ಕಾನೂನಿನ ಮೊರೆ ಹೋಗುವುದು ಯೋಗ್ಯ. ಆದರೆ ಈ ಮಾರ್ಗವನ್ನು ಬಿಟ್ಟು 'ಬೇನಾಮಿ' ಪತ್ರಗಳ ಮುಖಾಂತರ ನಮ್ಮ ಪ್ರತಿನಿಧಿಗಳನ್ನು ಅವಹೇಳನ ಮಾಡುವುದಾಗಲೀ, ಕರಪತ್ರಗಳನ್ನು ಹಂಚುವ ಮುಖಾಂತರವಾಗಲೀ ಯಾವ ಕಾರ್ಯ ಸಾಧನೆಯೂ ಆಗದೆ **ಮೂಲ ಉದ್ದೇಶವೇ ಬಿಟ್ಟು ಹೋಗುವ** ಸಂಭವ ಇದೆ. ಮುಂದೆ ಬೇರೆಯೇ ಸದಸ್ಯರು ಆಯ್ಕೆಯಾಗಿ ಬಂದರೂ ಆಗ ಯಾವುದೇ ಅವ್ಯವಹಾರವಾದಾಗ ನಾವು (ಪೌರರು) ಈಗಿನ ಸದಸ್ಯರುಗಳ ಬೆಂಬಲವನ್ನು ಪಡೆಯುವ ಹಾಗೆ ಇರಬೇಕು.

ಒಂದು ಕರಪತ್ರದ ಸಲುವಾಗಿ ಪುರಸಭೆಯವರು ಒಂದು ಪ್ರತಿ ಕರಪತ್ರ ಹೊರಡಿಸಿ ತಮ್ಮ ನಿಲುವನ್ನು ವಿವರಿಸಿದ್ದಾರೆ. ಅದರಲ್ಲಿ, "ನೂರಾರು ಜನರಿಗೆ ಒಳ್ಳೆಯ ಕೆಲಸ ಆಗುವಾಗ ಕೆಲವರಿಗೆ ಸಣ್ಣಪುಟ್ಟ ತೊಂದರೆಗಳು ಆಗುವುದಾದರೂ ಅದು ಸಹ್ಯ" ಎಂದು ತಿಳಿಸಿದ್ದಾರೆ. ಅದರಂತೆಯೇ, **ಸಾರ್ವಜನಿಕರಿಂದಲೂ ಸದಸ್ಯರುಗಳಿಗೆ ಸಣ್ಣಪುಟ್ಟ ತೊಂದರೆಗಳು ಆಗಿದ್ದಲ್ಲಿ ಹೆಚ್ಚಿನ ಜನರಿಗೆ ಒಳ್ಳೆಯದಾಗುವಾಗ ಆ ತೊಂದರೆಗಳನ್ನು ಸಹಿಸುವ ಮನೋಭಾವವನ್ನು ಅಧ್ಯಕ್ಷರು, ಕೌನ್ಸಿಲರ್‌ಗಳು ಸಹ ತೋರುವ ಮುಖಾಂತರ ಜನರಿಗೆ ಮೇಲ್ಪಂಕ್ತಿಯಾಗಬಹುದಾಗಿದೆ.**

ಕೆಲವರಿಗೆ ಸಹ್ಯವಾಗುವುದು ಇತರರಿಗೆ ಅಸಹ್ಯವೆನ್ನಿಸುವುದು, ಕೆಲವರಿಗೆ ಸರಿ ಎನ್ನಿಸಿರುವುದು ಇತರರಿಗೆ ಸರಿಯಾಗದಿರುವುದೇ ನಾವಿರುವ ಸಮಾಜದ ಪರಿಸ್ಥಿತಿ. ಎಲ್ಲರಿಗೂ ಎಲ್ಲವೂ ಸರಿಯಿದ್ದಲ್ಲಿ, ಒಬ್ಬರು ಹೇಳಿದ್ದನ್ನೇ ಎಲ್ಲರೂ ಅನುಕರಿಸಿದಲ್ಲಿ ನಮ್ಮ ರಾಜ್ಯಾಂಗಕ್ಕೆ ಮತ್ತು ನ್ಯಾಯಾಂಗಕ್ಕೆ ಯಾವುದೇ ಕೆಲಸವಿಲ್ಲ.

ಕಳೆದ ವಾರದ 'ಮುಂಜಾವು' ಸಂಚಿಕೆಯಲ್ಲಿ ಪ್ರಕಟವಾದ 'ಕೌನ್ಸಿಲರ್ ಸಂಬಂಧಿಕರಿಗೆ' ನೀಡಿಡ ಸೈಟಿನ ವಿಚಾರದಲ್ಲಿ ಪುರಸಭೆ ತನ್ನ ನಿಲುವನ್ನು ತಿಳಿಸುವ ಗೋಜಿಗೇ ಹೋಗಿಲ್ಲ. ಆ ವಿಷಯದಲ್ಲಿ ಅದರ ನಿಲುವು ಸರಿ ಎಂದಾದಲ್ಲಿ ಸಮರ್ಥಿಸಿ ಹೇಳಿಕೆ ನೀಡಿಯಾಗಲೀ, ತಮ್ಮ ನಿಲುವು ತಪ್ಪು ಎಂದಲ್ಲಿ

(2ನೇ ಪುಟಕ್ಕೆ)

ಎಂ. ಆರ್. ಕಣ್ಣನ್,
ಕೊಪ್ಪ.

## ಕೊಪ್ಪ ಸ॥ ಇ॥ ಮೇಲೆ ಬೈಕ್ ಹತ್ತಿಸುವ 'ಸಾಹಸ': ಒಬ್ಬನ ಸೆರೆ, ಒಬ್ಬ ನಾಪತ್ತೆ

ಕೊಪ್ಪ: ಇಲ್ಲಿನ ಪೋಲೀಸ್ ಸಬ್ ಇನ್ ಸ್ಪೆಕ್ಟರ್ ದುರ್ಗಯ್ಯ ಅವರ ಮೇಲೆ ಆ.10 ರಂದು ಹಂಚಿಕೊಳಲು ಜಯಪ್ರಕಾಶ್ ಮತ್ತು ಗುಣವಂತೆ ಪರಮೇಶ್ವರ ಎಂಬವರು ಮೋಟಾರ್ ಸೈಕಲ್ ಹತ್ತಿಸುವ ಪ್ರಯತ್ನ ನಡೆಸಿದರೆಂದು ಆರೋಪಿಸಲಾಗಿದ್ದು, ಆ.11 ರಂದು ಪರಮೇಶ್ವರ ಪೋಲೀಸರಿಗೆ ಸಿಕ್ಕಿದ್ದು ಆತನನ್ನು ಆ. 26ರವರೆಗೆ ನ್ಯಾಯಾಂಗ ಬಂಧನದಲ್ಲಿಡಲಾಗಿದೆ. ಜಯಪ್ರಕಾಶ್ ತಪ್ಪಿಸಿಕೊಂಡು ತಲೆಮರೆಸಿಕೊಂಡಿದ್ದಾನೆನ್ನಲಾಗಿದೆ. ಅವರುಗಳ ಬೈಕನ್ನು (ಜಾವಾ ಎಂವೈಹೆಚ್ 852) ವಶಪಡಿಸಿಕೊಳ್ಳಲಾಗಿದ.

ದುರ್ಗಯ್ಯ ಅವರು ಅಂದು ಸಂಜೆ 4 ಗಂಟೆಯ ಹೊತ್ತಿನಲ್ಲಿ ಮನೆಯಿಂದ ಠಾಣೆಗೆ ಬರುತ್ತಿದ್ದಾಗ ಎದುರಿನಿಂದ ಬೈಕಿನಲ್ಲಿ ಬಂದ ದುಷ್ಕರ್ಮಿಗಳು ಅವರ ಮೇಲೆ ಬೈಕ್ ಹತ್ತಿಸಲು ಯತ್ನಿಸಿ ಒಮ್ಮೆ ವಿಫಲರಾಗಿ ಪುನಃ ತಿರುಗಿಸಿಕೊಂಡು ಬಂದು ಠಾಣೆಯ ಎದುರಿಗೇ ಮತ್ತೊಮ್ಮೆ ಯತ್ನಿಸಿದಾಗ ಅವರು ಚರಂಡಿಯಿಂದ ಆಚೆಗೆ ಹಾರಿ ತಪ್ಪಿಸಿಕೊಳ್ಳಬೇಕಾಯಿತೆಂದು ತಿಳಿದು ಬಂದಿದೆ.

ಈ 'ಸಾಹಸ'ದ ಹಿಂದೆ ದೊಡ್ಡ ಪಿತೂರಿಯೊಂದು ಇರುವುದನ್ನು ಪರಮೇಶ್ವರ ವಿಚಾರಣೆಯ ವೇಳೆಯಲ್ಲಿ ಹೊರಗೆಡಹಿರುವುದಾಗಿ ನಂಬಲರ್ಹವಾಗಿ ತಿಳಿದು ಬಂದಿದೆ.

## ಕೊಪ್ಪ: ಬೇನಾಮಿ ಕರಪತ್ರ ಹಂಚಿಕೆ ನಾಟಕದ ಉದ್ದೇಶವೇನು ?

ಸ್ವಾತಂತ್ರ್ಯ ದಿನಾಚರಣೆಯ ದಿನ ಬೆಳಿಗ್ಗೆ ಮುಂಚೆಯೇ ಯಾರೋ ಕಿಡಿಗೇಡಿಗಳು ಕೊಪ್ಪದಲ್ಲಿ ಸಣ್ಣ ಕರಪತ್ರವೊಂದನ್ನು ಹಂಚಿಸಿದ್ದು ಅದರಲ್ಲಿ, ಈಚೆಗೆ ಸಬ್ ಇನ್ ಸ್ಪೆಕ್ಟರ್ ದುರ್ಗಯ್ಯನವರ ಮೇಲೆ ಇಬ್ಬರು ದುಷ್ಕರ್ಮಿಗಳು ಮೋಟಾರ್ ಸೈಕಲ್ ಹತ್ತಿಸಲು ನಡೆಸಿದ ಯತ್ನಕ್ಕೆ "ಪುರಸಭಾಧ್ಯಕ್ಷ ಮಂಜುನಾಥ ಶೆಟ್ಟಿ, ಕೌನ್ಸಿಲರ್‌ಗಳಾದ ಶೀನ ಭಂಡಾರಿ, ಕೃಷ್ಣ, ಕಾಯಿ ನಾಗರಾಜ ಇವರುಗಳು ಕಾರಣ"ವೆಂದು ಆಪಾದಿಸಲಾಗಿದೆ.

ಈ ಕರಪತ್ರದ ಮೇಲೆ ಮುದ್ರಣವಾದ ಪ್ರೆಸ್ಸಿನ ಹೆಸರಿಲ್ಲ, ಹೊರಡಿಸಿದವರ ಹೆಸರೂ ಇಲ್ಲ. "ನೊಂದ ಸಾರ್ವಜನಿಕರು" ಎಂದು ಮಾತ್ರ ಇದೆ. ಅದನ್ನು ಯಾರು, ಯಾಕೆ ಹೊರಡಿಸಿದರು, ಯಾರು ಹಂಚಿದವರು— ಎಂಬ ಯಾವ ವಿಚಾರವೂ ಇನ್ನೂ ಪತ್ತೆಯಾಗಿಲ್ಲ. ಆದರೆ ಅದನ್ನು ಹಂಚಿದ್ದರ ಜೊತೆ ಜೊತೆಗೇ, "ಅದನ್ನು 'ಮುಂಜಾವು' ಪ್ರೆಸ್ಸಿನಲ್ಲೇ ಮುದ್ರಿಸಿದ್ದಂತೆ" ಎಂದೂ, "ಸಿರಿಮನೆ ನಾಗರಾಜ್ ಮತ್ತು ದುರ್ಗಯ್ಯ ಅದನ್ನು ಹಂಚಲು ಕೊಟ್ಟರಂತೆ" ಎಂದೂ ವ್ಯವಸ್ಥಿತವಾದ ಅಪಪ್ರಚಾರವೊಂದನ್ನು ಪೇಟೆಯ ತುಂಬ ಹಬ್ಬಿಸಲಾಗಿದೆ. ಅಷ್ಟೇ ಅಲ್ಲದೆ ಊರಿನ ಹಲವರ ಬಗ್ಗೆ ಸದರಿ ಕರಪತ್ರವನ್ನು ಎಲ್ಲರಿಗೂ ಹಂಚಿದವರೆಂದು ಪ್ರಚಾರ ಹಬ್ಬಿಸಿ ಅನಂತರ ಅವರಿಗೆ ಜೋರು ಮಾಡುವ ಪ್ರಕರಣಗಳು ನಡೆದಿವೆ, ನಡೆಯುತ್ತಿವೆ.

ಬಹುಶಃ ಯಾವುದೇ ರೀತಿ ವಿಚಾರ–ಆಲೋಚನೆ ಮಾಡುವ 'ಕಷ್ಟ' ತೆಗೆದುಕೊಳ್ಳದೆ ಕೇವಲ ಅವರಿವರ ಬಗ್ಗೆ **ವರ್ಣರಂಜಿತವಾದ** 'ಸುದ್ದಿ'ಗಳನ್ನು ಮಾತ್ರ ಓದಿ ಕೇಳಿ ಅದನ್ನೇ ಹಬ್ಬಿಸುವ ಅಭ್ಯಾಸದ ಜನಗಳು ಮಾತ್ರ ಈ 'ಪ್ರಚಾರ'ವನ್ನು ನಂಬಿರುವಂತಿದೆ. ಅದಿರಲಿ.

ನಮ್ಮಲ್ಲಿ ಯಾವುದೇ ಮುದ್ರಣವಾದರೂ ಅದರಲ್ಲಿ ನಮ್ಮ ಪ್ರೆಸ್ಸಿನ ಹೆಸರಿರುತ್ತದೆ. ಹಾಗೆಯೇ ಯಾರದಾದರೂ ಕಾರ್ಯ ದಕ್ಷತೆಯನ್ನು ಪ್ರಶಂಸಿಸುವುದಾಗಲಿ ಅಥವಾ ಯಾರದಾದರೂ ಅವ್ಯವಹಾರ, ಭ್ರಷ್ಟತೆ, ಅನಾಗರಿಕತೆ, ಜನದ್ರೋಹ ಮುಂತಾದುವನ್ನು ಬಯಲಾಗಿಸುವುದು ಅಥವಾ ಖಂಡಿಸುವುದಾಗಲಿ, ಅದನ್ನು ನಮ್ಮ ಪತ್ರಿಕೆಯ ಮೂಲಕವೇ ಮಾಡುವುದು ನನ್ನ ಕ್ರಮ. ಇದೇ ಪುರಸಭಾ ಕೌನ್ಸಿಲ್ಲಿನ ಬಗ್ಗೆ ನಮ್ಮ ಪತ್ರಿಕೆಯಲ್ಲಿ ಹಿಂದೆ ಮತ್ತು ಈಚೆಗೆ ಬಂದ ಬರಹಗಳನ್ನು ಓದಿರುವವರಿಗೆ ಇದರ ಅರಿವಾಗಬಹುದು. ಅಲ್ಲದೆ ನಮಗೆ ಮಾಡಲು ಉತ್ತಮವಾದ ಬೇರೆ ಹಲವಾರು ಕೆಲಸಗಳಿವೆ. ಬೇನಾಮಿ ಕರಪತ್ರಗಳನ್ನೋ ವದಂತಿಗಳನ್ನೋ ಸೃಷ್ಟಿಸುತ್ತ ಕೂರುವುದಲ್ಲ.

ಆದರೆ ಅಂದೇ ನನ್ನ ಮೇಲೆ ತೀವ್ರ ಹಲ್ಲೆ ನಡೆಸುವ ಇನ್ನೊಂದು ದೊಡ್ಡ ಪ್ರಯತ್ನ ಸ್ವಲ್ಪದರಲ್ಲಿ ನನ್ನನ್ನು "ಸವರಿಕೊಂಡು" ಹೋಯಿತು. ಅಂದು ಸಂಜೆ 4.30ರ ಹೊತ್ತಿನಲ್ಲಿ ನಾನು ಪೋಲೀಸ್ ಠಾಣೆಯ ಸಮೀಪವಿರುವ ಬಲವಂತರಾಯರ ಕಾಫಿ ಬಾರ್‌ನಲ್ಲಿ ಕುಳಿತಿದ್ದಾಗ ಬೇರಾರೂ ಇರದಿದ್ದ ಸಮಯ ನೋಡಿ ಮಂಜುನಾಥ ಶೆಟ್ಟಿ, ಕೃಷ್ಣ, ಬಿರ್ಲಜಿಕೆ ಆಚಾರ್, ಎಸ್.ಕೆ. ನಾಯಕ್ ಮತ್ತು ತೀರ್ಥಹಳ್ಳಿಯಿಂದ ಕರೆಸಲಾಗಿದ್ದ ಇಬ್ಬರು— ಇಷ್ಟು ಜನ ನನ್ನನ್ನು ಸುತ್ತುವರಿದು, ತುಳುವಿನಲ್ಲಿ, "ಒಂದು ಪೆಟ್ಟಿಗೆ ಇಲ್ಲವಲ್ಲ ಮಾರಾಯರೆ" ಎನ್ನುತ್ತ ಹಲ್ಲೆಗೆ ಸಜ್ಜಾದರು. ಆದರೆ ಅವರು ಯಾಕೋ ಸ್ವಲ್ಪ ತಡ ಮಾಡಿದ್ದನ್ನು ಕಂಡು ನಾನು ಅವರಿಂದ ಹೇಗೋ ತಪ್ಪಿಸಿಕೊಂಡು ಹೊರಬಂದೆ. ಅದೇ ಸಮಯದಲ್ಲಿ ಕಾಕತಾಳೀಯವೆಂಬಂತೆ ಸಬ್ ಇನ್‌ಸ್ಪೆಕ್ಟರ್‌ರವರು ತಮ್ಮ ಮನೆಯಿಂದ ಠಾಣೆಯ ಕಡೆಗೆ ಹೊರಟಿದ್ದು, ಅವರು ಠಾಣೆಯೊಳಗೆ ಹೋಗುವುದನ್ನೇ ಇವರುಗಳು ಕಾದಿದ್ದರು ಎಂಬುದು ಅನಂತರ ತಿಳಿಯಿತು. ಆದರೆ ಅಷ್ಟರಲ್ಲಿ ನಾನು ಹೊರಗೆ ಬಂದು ಬಿಟ್ಟದ್ದರಿಂದ ಪೂರ್ಣಪ್ರಮಾಣದ ಹಲ್ಲೆ ನಡೆಯದೆ ಹೋಯಿತು.

ಹೀಗೆ ಪುನಃ ಠಾಣೆಗೆ ದೂರು ಕೊಡುವ ಪ್ರಮೇಯ ಬಂದಿತು: ಫೆ. 20ರಂದು ನನ್ನ ಮೇಲೆ ಠಾಣೆಯೆದುರು ನಡೆದ ಹಲ್ಲೆಯ ಬಗ್ಗೆ ನಾನು ಕೊಟ್ಟಿದ್ದ ದೂರಿನ ಪ್ರಕರಣ ಈಗ ನ್ಯಾಯಾಲಯದ ಮುಂದಿದ್ದು, ಅದನ್ನು ಹಿಂತೆಗೆದುಕೊಳ್ಳುವಂತೆ ನನ್ನ ಮೇಲೆ ಜೀವಭಯದ ಒತ್ತಡ ಹೇರುವುದು, ಅನ್ಯಾಯ–ಅಕ್ರಮಗಳ ವಿರುದ್ಧ ನಾಗರಿಕರು ನಡೆಸುತ್ತಿರುವ ಕ್ಷೀಣವಾದ ಪ್ರತಿಭಟನೆಗೂ ಸಹ ನಮ್ಮ ಪತ್ರಿಕೆಯ ಸಹಕಾರ ಸಿಗದಂತೆ ಮಾಡುವುದು, **ಹಾಗೂ ಆ ಅವ್ಯವಹಾರಗಳಿಂದ ಜನರ ಗಮನವನ್ನು ಬೇರೆಡೆಗೆ ತಿರುಗಿಸುವುದು, ಹಾಗೆ ಪ್ರತಿಭಟಿಸುವವರನ್ನು ತೆಪ್ಪಗಾಗಿಸುವುದು** ಮುಂತಾಗಿ ಇನ್ನೂ ಹಲವು 'ಯೋಜನೆ'ಗಳು ಈ ಕರಪತ್ರ ವಿತರಣೆಯ ನಾಟಕ ಮತ್ತು ಹಲ್ಲೆಗೆ ಕಾರಣವಾಗಿರಬಹುದು.

ಒಟ್ಟಿನಲ್ಲಿ, ಒಂದು ಸುಳ್ಳು ವದಂತಿ ಸೃಷ್ಟಿಸಿ, ಅದನ್ನೇ 'ಸುದ್ದಿ' ಮಾಡಿ, ಅದನ್ನೇ 'ಅಧಿಕೃತ' ಎನ್ನಿಸಿ, ಅದರ ವಿರುದ್ಧವೇ ದೂರು, ಮನವಿ, ನಿಯೋಗ, ಬರಹ, 'ಮೊಕದ್ದಮೆ' ಮುಂತಾದುವನ್ನು ಹೂಡಿ, ತಮ್ಮ ಕಾರ್ಯ ಸಾಧಿಸಿಕೊಳ್ಳುವುದು ಹಾಗೂ ಎಲ್ಲ ಸಂಗತಿಗಳನ್ನೂ 'ರಟ್ಟೆ ಬಲ'ದಿಂದ ರಸ್ತೆಯಲ್ಲೇ ತೀರ್ಮಾನಿಸಲು ಹೊರಡುವುದು— ಇದು ಕಳೆದೊಂದು ವರ್ಷದಿಂದ ಕೊಪ್ಪದ ನಿತ್ಯ ಜೀವನವೆಂಬಂತಾಗಿದೆ.

ಬಹುಶಃ ಅಂಥದೇ ಉದ್ದೇಶದಿಂದಲೇ ಈ ದಿಕ್ಕು–ದೆಸೆಯಿಲ್ಲದ ಕರಪತ್ರ ಸಹಾ ಹುಟ್ಟಿರಬಹುದು. ಊರಿನ ಶಾಂತಿ ಕಾಪಾಡುವ ಜವಾಬ್ದಾರಿ ಹಾಗೂ ಸಾಮರ್ಥ್ಯ ಇರಬೇಕಾದ ಪೋಲೀಸು ಇಲಾಖೆ ಈ ಕರಪತ್ರ ಯಾರಿಂದ, ಎಲ್ಲಿ ಹುಟ್ಟಿತೆಂದು ಪತ್ತೆ ಹಚ್ಚಿದಲ್ಲಿ ಖಂಡಿತ ಈ ಗೊಂದಲಗಳೆಲ್ಲ ಕೊನೆಗೊಂಡು ಶಾಂತಿ ನೆಲೆಸುವುದರಲ್ಲಿ ಸಂಶಯವಿಲ್ಲ.

—ಸಿರಿಮನೆ ನಾಗರಾಜ್.
17.8.86

## ಓದುಗರ ಪತ್ರಗಳು

# ರಸ್ತೆ ಮೇಲೆ ನೀರು, ವಾಹನಗಳ ಭರಾಟೆ

ಮಾನ್ಯರೇ,

ಕೊಪ್ಪ ಪೇಟೆಯ ಮುಖ್ಯ ರಸ್ತೆಯಲ್ಲಿ ನೀರು ಸರಬರಾಜು ಯಂತ್ರಾಲಯದ ಬಳಿಯಿಂದ ಇಂಡಿಯನ್ ಬ್ಯಾಂಕಿನವರೆಗೆ ಮಳೆಗಾಲದಲ್ಲಿ ರಸ್ತೆಯ ಮೇಲೆ ಚರಂಡಿಯ ನೀರು ಹರಿದು ಪಾಚಗಟ್ಟಿರುತ್ತದೆ. ನಡೆದಾಡುವವರು ಜಾರಿ ಬೀಳುವಂತಿರುತ್ತದೆ. ಈ ರಸ್ತೆಯಲ್ಲಿ ಪ್ರಾಥಮಿಕ ಶಾಲೆಗೆ ಹೋಗಿ ಬರುವ ಮಕ್ಕಳು ಜಾರಿ ಬೀಳುತ್ತಿರುತ್ತಾರೆ. ಜೋರು ಮಳೆಯಲ್ಲಿ ರಸ್ತೆಯ ಮೇಲೆ ಒಂದು ಅಡಿಯಷ್ಟು ನೀರು ಹರಿಯುತ್ತದೆ ವಾಹನಗಳು ವಿಪರೀತ ವೇಗವಾಗಿ ಹೋಗುವಾಗ ರಸ್ತೆಯಲ್ಲಿರುವವರಿಗೆ ಕೆಸರು ನೀರಿನ ಸ್ನಾನವಾಗುತ್ತದೆ

ಶಾಲೆಗಳ ಸಮೀಪದಲ್ಲಿ ಶಾಲೆ ಬಿಡುವ ಮತ್ತು ಆರಂಭವಾಗುವ ಸಮಯದಲ್ಲಿ ವಾಹನಗಳ ವೇಗಕ್ಕೆ ಮಿತಿಯಿರಬೇಕೆಂಬುದನ್ನು ಅನೇಕರು ಪಾಲಿಸುತ್ತಿಲ್ಲ. ಇದಕ್ಕಾಗಿ ಎರಡು ಸಲಹೆಗಳನ್ನು ಸಂಬಂಧಪಟ್ಟವರ ಗಮನಕ್ಕೆ ತರಲು ಬಯಸುತ್ತೇನೆ.

1. ಸಂಬಂಧಪಟ್ಟವರು ಚರಂಡಿಯ ನೀರು ರಸ್ತೆಯ ಮೇಲೆ ಹರಿಯದಿರುವಂತೆ ವ್ಯವಸ್ಥೆ ಮಾಡಬೇಕು.

2. ವಾಹನಗಳ ವೇಗವನ್ನು ನಿಯಂತ್ರಿಸುವ ಸಲುವಾಗಿ ಸಂಬಂಧಪಟ್ಟವರು ತಿಂಗಳಿಗೊಮ್ಮೆಯಾದರೂ ಅಂಥ ಸ್ಥಳಗಳಲ್ಲಿ ಸ್ವಲ್ಪ ಹೊತ್ತು ತನಿಖೆ ಮಾಡಿ ಮಿತಿ ಮೀರಿದವರಿಗೆ ಎಚ್ಚರಿಕೆ ಕೊಡಬೇಕು.

**—ಎಸ್. ವಿ. ಮಲ್ಲಿಕಾರ್ಜುನ ಭಟ್,**
ಕೊಪ್ಪ.

### ಅಭಿನಂದನೆ

ಮಾನ್ಯರೆ,

ಸಮುದಾಯ ಆರೋಗ್ಯ ಮಾರ್ಗದರ್ಶಿಗಳಾದ ಪುರುಷರನ್ನು ಸೇವೆಯಿಂದ ವಿಮುಕ್ತಗೊಳಿಸಿರುವುದನ್ನು ರದ್ದುಪಡಿಸಿ, 1-7-86ರಿಂದ ಪುನಃ ಸೇವೆಗೆ ತೆಗೆದುಕೊಂಡು ನೇಮಕದ ಜ್ಞಾಪನಾಪತ್ರ ಕಳುಹಿಸಿರುವ ಬಗ್ಗೆ ಕೇಂದ್ರ ಸರ್ಕಾರವನ್ನೂ ಸಂಬಂಧಪಟ್ಟ ಅಧಿಕಾರಿಗಳನ್ನೂ ಸ॥ ಆ॥ ಮಾರ್ಗದರ್ಶಿಗಳ ಸಂಘದ ಪರವಾಗಿ ಈ ಮೂಲಕ ಅಭಿನಂದಿಸುತ್ತೇನೆ.

**—ಎಸ್. ಜಿ. ಸುಬ್ರಮಣ್ಯ,**
ಜಿಲ್ಲಾ ಮತ್ತು ತಾ॥ ಕಾರ್ಯದರ್ಶಿ,
ಸ॥ಆ॥ಮಾ॥ ಸಂಘ.

# "ಪರಿಹಾರ: ಭೂಮಾಲೀಕರು ಎಚ್ಚರಾಗಲಿ"

ಮಾನ್ಯರೆ,

ನಿಮ್ಮ ದಿನಾಂಕ 3.8.86ರ ಪತ್ರಿಕೆಯಲ್ಲಿ ನೀವು ಪ್ರಕಟಿಸಿರುವ ಮಾಜಿ ಭೂಮಾಲೀಕರ ಬೇಡಿಕೆ ಬಗೆಗಿನ ವರದಿಯನ್ನು ನೋಡಿದೆ. ವಿಷಯವು ಸಂಕ್ಷೇಪವಾಗಿಯೂ, ಸ್ವಚ್ಛವಾಗಿಯೂ, ಪೂರ್ಣ ಅರ್ಥಗರ್ಭಿತವಾಗಿಯೂ ಪ್ರಕಟವಾಗಿದೆ. ನಿಮ್ಮ ಪ್ರಕಟನೆಗೆ ಅನಂತ ಧನ್ಯವಾದಗಳು.

ತಮಗೆ ಬರಬೇಕಾದ ನ್ಯಾಯವಾದ ಪರಿಹಾರವನ್ನು ಪಡೆಯಲು ಪ್ರಯತ್ನಿಸದೇ ನಿದ್ರಿಸುತ್ತಿರುವ ಹಾಗೂ ಎಲ್ಲಿಯೋ ಅಪ್ಪಿತಪ್ಪಿ ಪ್ರಯತ್ನಮಾಡುತ್ತಿರುವ ಒಬ್ಬಿಬ್ಬರಿಗಾದರೂ ಸಹಕಾರವನ್ನೂ ಸಹ ಕೊಡದಿರುವ ಮಾಜಿ ಭೂಮಾಲೀಕರು ನಿಮ್ಮ ವರದಿಯಿಂದಲಾದರೂ ಎಚ್ಚೆತ್ತು ಕಾರ್ಯಪ್ರವೃತ್ತರಾದರೆ ನಮ್ಮ ಉದ್ದೇಶ ಈಡೇರಿದಂತೆ.

ಇನ್ನು ಮುಂದೂ ಸಹ ನಮಗೆ ಸಂಪೂರ್ಣ ಸಹಕಾರವನ್ನು ನೀಡುತ್ತೀರೆಂದು ಆಶಿಸುತ್ತೇನೆ.

**—ಎಂ. ಸುಬ್ಬರಾಮಯ್ಯ,**
ಶೃಂಗೇರಿ.

# ಬಿ.ಎಸ್.ಜಿ. ಆದಾಯ ಮಿತಿ: ಡಿಡಿಪಿಐ ಸ್ಪಷ್ಟನೆ

ಬಿ.ಎಸ್.ಜಿ. ಗುಂಪಿನ ವಿದ್ಯಾರ್ಥಿಗಳಿಗೆ ಶುಲ್ಕ ವಿನಾಯಿತಿ ಮತ್ತು ಇತರೆ ಸೌಲಭ್ಯಗಳಿಗಾಗಿ ವಾರ್ಷಿಕ ಆದಾಯ ಮಿತಿ 3600 ರೂ. ಇರುವುದಾಗಿ ಚಿಕ್ಕಮಗಳೂರಿನ ಡಿಡಿಪಿಐಯವರು ಹರಿಹರಪುರದ ಹೆಚ್. ಎಸ್. ಚಂದ್ರಶೇಖರ್ ಎಂಬವರ ಪತ್ರಕ್ಕೆ ಸ್ಪಷ್ಟನೆ ನೀಡಿ ತಿಳಿಸಿದ್ದಾರೆ. ಈ ಪತ್ರ ನಮ್ಮ ಪತ್ರಿಕೆಯಲ್ಲೂ (3.8.86) ಪ್ರಕಟವಾಗಿದ್ದನ್ನು ಇಲ್ಲಿ ಸ್ಮರಿಸಬಹುದು. **—ಸಂ.**

# ಕುಟುಂಬ ಕಲ್ಯಾಣ ಲಾಟರಿ: ಕೊಪ್ಪತಾ॥ಗೆ 2ನೇಬಹುಮಾನ

ಕೊಪ್ಪ: ಕುಟುಂಬ ಕಲ್ಯಾಣ ಲಾಟರಿಯಲ್ಲಿ ಜುಲೈ ತಿಂಗಳ 2ನೇ ಬಹುಮಾನ (1500ರೂ.) ಕೊಪ್ಪ ತಾ॥ ಕುಂದೂರು ಗ್ರಾಮದ ಶ್ರೀಮತಿ ಜಾನಕಿ ಎಂಬವರಿಗೆ ಲಭಿಸಿದೆ.

## ಒಳ ಚರಂಡಿಗೆ 1.5 ಲಕ್ಷ ರೂ.

ನ. ರಾ. ಪುರ: ಇಲ್ಲಿನ ಪೇಟೆಯೊಳಗೇ ಒಳಚರಂಡಿ ನಿರ್ಮಾಣಕ್ಕಾಗಿ 1.5 ಲಕ್ಷ ರೂ. ಮಂಜೂರಾಗಿರುವುದಾಗಿ ಪುರಸಭಾಧ್ಯಕ್ಷ ವಿ.ಜಿ. ಚಂದ್ರಶೇಖರ್ ತಿಳಿಸಿದ್ದಾರೆ.

# ಶಂಕರ್ ಕಾರ್ಮಿಕ ಸಂಘದ ಪದಾಧಿಕಾರಿಗಳು

ಕೊಪ್ಪ: ಚಿಕ್ಕಮಗಳೂರು ಜಿಲ್ಲಾ ಟ್ರಾನ್ಸ್‌ಪೋರ್ಟ್ ಅಂಡ್ ಜನರಲ್ ಮಜ್ದೂರ್ ಸಂಘಕ್ಕೆ ಆ. 10ರಂದು ನಡೆದ ಸರ್ವ ಸದಸ್ಯರ ಸಭೆಯಲ್ಲಿ ಈ ಕೆಳಕಂಡವರು ಪದಾಧಿಕಾರಿಗಳಾಗಿ ಸರ್ವಾನುಮತದಿಂದ ಆಯ್ಕೆಯಾದರು:

ಪಿ.ವಿ. ಸತ್ಯನಾರಾಯಣ ಭಟ್, (ಅಧ್ಯಕ್ಷ), ಬಿ.ಟಿ. ಚಂದ್ರಶೇಖರ (ಉಪಾಧ್ಯಕ್ಷ), ಆಯನೂರು ಮಂಜುನಾಥ್ (ಪ್ರಧಾನ ಕಾರ್ಯದರ್ಶಿ), ಹೆಚ್. ಆರ್. ಸಂಜೀವ (ಕಾರ್ಯದರ್ಶಿ), ರಿಚರ್ಡ್ ಡಿ' ಸೋಜಾ (ಸಹಾಯಕ ಕಾರ್ಯದರ್ಶಿ), ಎಲ್. ರಾಮಚಂದ್ರ (ಖಜಾಂಚಿ)

ಸದಸ್ಯರು: ಜೆ. ಸೀತಾರಾಮ ರಾವ್, ಕೆ. ಎಸ್. ಭಾಸ್ಕರ, ಎಂ. ಟಿ. ಗ್ರೆಗೊರಿ, ಬಸವ, ಎಸ್. ಶ್ರೀನಿವಾಸಾಚಾರ್, ಕೆ. ಲಕ್ಷ್ಮಣರಾವ್, ಕೆ.ಜೆ. ಅಗಸ್ಟಿನ್, ದೇವರಾಜ್.

### ಸಂಬಳ ಬಟವಾಡೆ

ಜೂನ್ – ಜುಲೈನಲ್ಲಿ ನಡೆದ ಮುಷ್ಕರದ ಬಗ್ಗೆ ಆದ ಒಡಂಬಡಿಕೆಯ ಪ್ರಕಾರ ಕೊಡಬೇಕಾಗಿದ್ದ 2 ದಿನದ ಸಂಬಳವನ್ನು ಹಂಗಾಮಿಯವರಿಗೆ ಕೊಡದಿದ್ದ ಬಗ್ಗೆ ಕಾರ್ಮಿಕ ಇಲಾಖೆಯವರ ಮಧ್ಯಪ್ರವೇಶದ ನಂತರ ಆ. 9ರಂದು ಬಟವಾಡೆ ಮಾಡಲಾಯಿತೆಂದು ತಿಳಿದುಬಂದಿದೆ.

## ಚೇತಕ್ ಕ್ರಿಕೆಟರ್ಸ್

ಕೊಪ್ಪ: ಆ. 10ರಂದು ರಚಿತವಾದ ಬಾಳಗಡಿಯ 'ಚೇತಕ್ ಕ್ರಿಕೆಟ್ ಅಸೋಸಿಯೇಶನ್' ನೂತನ ಕಾರ್ಯಕಾರಿ ಸಮಿತಿ ಹೀಗಿದೆ:

ರಾಜಾರಾವ್. (ಮ್ಯಾನೇಜರ್,) ಸಿ.ಪಿ. ಹರೀಶ್ ಕುಮಾರ್ (ನಾಯಕ), ಕೆ. ಜಿ. ಸತೀಶ್ ಶಾಸ್ತ್ರಿ (ಉಪನಾಯಕ), ವೈ.ಎಸ್. ಶೇಷಗಿರಿ (ಕಾರ್ಯದರ್ಶಿ), ಹಾಗೂ ಕೆ. ಜಗದೀಶ್ (ಸಹ ಕಾರ್ಯದರ್ಶಿ).

## ಬೀಳ್ಕೊಡುಗೆ

ಹಿರೇಕೊಡಿಗೆ: ಇಲ್ಲಿನ ಪ್ರಾಥಮಿಕ ಆರೋಗ್ಯ ಘಟಕದಲ್ಲಿ ವೈದ್ಯಾಧಿಕಾರಿಯಾಗಿ ಸೇವೆ ಸಲ್ಲಿಸಿದ್ದ ಡಾ॥ ಕೃಷ್ಣಪ್ಪ ಇವರಿಗೆ ಶ್ರೀ ಆಂಜನೇಯ ಯುವಕ ಸಂಘದ ಆಶ್ರಯದಲ್ಲಿ ಆ. 10ರಂದು ಬೀಳ್ಕೊಡುಗೆ ಸಮಾರಂಭ ಏರ್ಪಡಿಸಲಾಗಿತ್ತು. ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿದ್ದ ಊರಿನ ಹಿರಿಯ ವ್ಯಕ್ತಿ ಸಿದ್ದಪ್ಪನಾಯ್ಕರು ವೈದ್ಯರ ಕಾರ್ಯವನ್ನು ಪ್ರಶಂಸಿಸಿದರು. ವಿವಿಧ ಇಲಾಖಾ ಅಧಿಕಾರಿಗಳು, ಶಾಲಾ ಉಪಾಧ್ಯಾಯರುಗಳು, ಊರಿನ ಪ್ರಮುಖರು ಈ ಸಮಾರಂಭದಲ್ಲಿ ಭಾಗಿಗಳಾಗಿದ್ದರು. ಸಂಘದ ಸದಸ್ಯ ರಮೇಶ್ ಸ್ವಾಗತಿಸಿ, ವಂದಿಸಿದರು. (ವರದಿ: ಹೊಸ್ಮನೆ ರಮೇಶ್)

## ದೇವರಾಯರಿಗೆ ಬೀಳ್ಕೊಡುಗೆ

**ಕೊಪ್ಪ:** ಈ ತಾಲ್ಲೂಕಿನ ಯುವಜನ ಸೇವಾಧಿಕಾರಿಗಳಾಗಿ ಜನಪ್ರಿಯರಾಗಿದ್ದ ಆರ್. ದೇವರಾಯ ಅವರಿಗೆ ಬಾಳಗಡಿಯ ಸರ್ವೋದಯ ಯುವಕ ಸಂಘದ ಆಶ್ರಯದಲ್ಲಿ ಆ. 7ರಂದು ಜಿಲ್ಲಾ ಸ॥ ಯುವಜನ ಸೇವಾಧಿಕಾರಿ ಕಣ್ಣನ್ ಅಧ್ಯಕ್ಷತೆಯಲ್ಲಿ ಬೀಳ್ಕೊಡುಗೆ ನೀಡಲಾಯಿತು. ತಾಲ್ಲೂಕಿನ ನೂತನ ಯು॥ ಸೇವಾಧಿಕಾರಿ ಕರುಣಚಂದ್ರ ಮುಖ್ಯ ಅತಿಥಿಯಾಗಿದ್ದರು. ತಾ॥ ಯು॥ ಒಕ್ಕೂಟದ ಅಧ್ಯಕ್ಷ ದಯಾನಂದ, ಪ್ರಸನ್ನ, ಕೆ.ಎಸ್. ಪ್ರಕಾಶ್ ಮಾತನಾಡಿದರು. ಬಿ. ಎನ್. ವಾಸುದೇವರವರು ಸ್ವಾಗತಿಸಿ, ಕಾರ್ಯದರ್ಶಿ ಪಿ. ವಿ. ನರಸಿಂಹ ವಂದಿಸಿದರು. ದೇವರಾಯರಿಗೆ ನೆನಪಿನ ಕಾಣಿಕೆ ನೀಡಿ ಗೌರವಿಸಲಾಯಿತು.

# ಪ್ರಜಾತಂತ್ರದಲ್ಲಿ ಟೀಕೆ, ಆಕ್ಷೇಪ, ಬಯಲಿಗೆಳೆಯುವಿಕೆ....

(1ನೇ ಪುಟದಿಂದ)

ಅದರತಿದ್ದುಪಡಿಯ ವಿಚಾರ ತಿಳಿಸುವುದಾಗಲಿ ಸೂಕ್ತ.

'ಮುಂಜಾವು' ಪುರಸಭೆಯನ್ನು ಹೊಗಳಿದಾಗ (ಬಸ್ ಸ್ಟ್ಯಾಂಡ್ ಹೋಟೆಲ್, ಪುರಸಭೆ ಮಳಿಗೆ ಇತ್ಯಾದಿ ಪ್ರಕರಣಗಳಲ್ಲಿ) ಹೊಗಳಿಕೆಯನ್ನು ಸ್ವೀಕರಿಸಿದ ಪ್ರವೃತ್ತಿಯೇ ಖಂಡಿಸಿದಾಗಲೂ ಸ್ವೀಕರಿಸುವ ಪ್ರವೃತ್ತಿಯಾದಲ್ಲಿ ಸಾರ್ವಜನಿಕರು ನಿಮ್ಮೊಡನೆ ಇರುತ್ತಾರೆಂಬುದು ತಿಳಿದಿರಲಿ. ಕರಪತ್ರದಲ್ಲಿ ತಮ್ಮ ಹೆಸರನ್ನು ನೋಡಿದಾಗ ಸದಸ್ಯರಿಗೆ ಬರುವ ಕೋಪ, ಇತ್ಯಾದಿಗಳು ಕರಪತ್ರದ ಪ್ರಕಟಣೆಗೆ ಸಂಬಂಧಪಡದೇ ಇರುವವರನ್ನು ಹೆಸರಿಸಿ ಆಡುವಾಗ ಅವರಿಗೂ ಅದೇ ಅನುಭವವಾಗುವುದು ಮರೆಯದಿರಲಿ. ಈ ಬಗ್ಗೆ ಸೂಕ್ತ ವಿಚಾರಣೆ ನಡೆಸಿ ಸಂಬಂಧಿಸಿದವರ ಮೇಲೆ ಕ್ರಮ ಜರುಗಿಸಲು ಯಾರ ಆಕ್ಷೇಪಣೆಯೂ ಇರದು.

ಕಾಕತಾಳೀಯವಾಗಿ ಈ ದಿನ ಉಡುಪಿ "ಬಳಕೆದಾರರ ವೇದಿಕೆ"ಯ ಪ್ರತಿಯೂ ಸಿಕ್ಕಿತು. ಅದರಲ್ಲಿಯ ಎರಡು ಉಕ್ತಿಗಳನ್ನು ಇಲ್ಲಿ ಸ್ಮರಿಸುವುದು ಸೂಕ್ತ:

**1. "ಅಕ್ರಮಗಳನ್ನು ಅಥವಾ ಅನ್ಯಾಯವನ್ನು ಕಂಡಾಗ ನೀವು ಸಾಕಷ್ಟು ಗಟ್ಟಿಯಾಗಿ ಆಕ್ಷೇಪಿಸಿದರೆ, ಯಾರಾದರೂ ಒಬ್ಬರಿಗೆ ಕೇಳಿಸದಿರದು, ಯಾವುದಾದರೊಂದು ಕಾರ್ಯಾಚರಣೆ ಆಗದಿರದು. ನಮ್ಮ (ಅಥವಾ ಪೂರೈಕೆದಾರರ) ಎಣಿಕೆಯಷ್ಟು ಅಸಹಾಯಕರಲ್ಲ ನಾವು. ಕೇವಲ ಶೇ. 10ರಷ್ಟು ಬಳಕೆದಾರರು ಜಾಗೃತರಾದರೂ ಅದ್ಭುತಗಳನ್ನೇ ಸಾಧಿಸಬಹುದು."**

**—ರಾಲ್ಫ್ ನ್ಯಾಡರ್.**

(ಬಳಕೆದಾರರ ಆಂದೋಲನದ ಜಗದ್ವಿಖ್ಯಾತ ವೀರ ನಾಯಕ.)

2. "ಟೀಕಿಸುವುದು ಮತ್ತು ಬಯಲಾಗಿಸುವುದು ಭ್ರಷ್ಟಾಚಾರದ ಉಚ್ಚಾಟನೆಗೆ ತಕ್ಕ ಆಯುಧಗಳು. ಸಮಾಜವು (ಟೀಕೆಯ ಮಟ್ಟಿಗೆ) ತೆರವಾಗಿರುವುದು **ಸರಕಾರದ ಬೊಜ್ಜನ್ನು ಪದರ ಪದರುಗಳಾಗಿ ಕಳಚಲು ತಕ್ಕ ಉಪಕರಣ. ಪ್ರಜಾತಂತ್ರಕ್ಕಂತೂ ಅನುಕೂಲ "**

**—ಹಿರಣ್ಮಯ ಕಾರ್ಲೇಕರ್**

ಇವೆರಡನ್ನೂ ಸಾರ್ವಜನಿಕರು ಮನಗಾಣಬೇಕಾದುದು ಅತ್ಯಂತ ಅವಶ್ಯಕ. ಇನ್ನಾದರೂ ಅನ್ಯಾಯವನ್ನು ಕಂಡಾಗ, ತಮ್ಮ ಹೆಸರು, ವಿಳಾಸ ಹಾಕಿ ಸಂಬಂಧಿತರಿಗೆ ಪತ್ರಬರೆಯುವ ಅಥವಾ ಪತ್ರಿಕೆಗಳ ಮುಖಾಂತರ ಪ್ರತಿಭಟಿಸುವ ಮನೋಭಾವವನ್ನು ಸಾರ್ವಜನಿಕರು ಬೆಳೆಸಿಕೊಳ್ಳಲಿ. ಹಾಗೆಯೇ ಹೊಗಳಿಕೆ, ತೆಗಳಿಕೆ ಎರಡನ್ನೂ ಸಮನಾಗಿ ಸ್ವೀಕರಿಸುವ ಮನೋಭಾವವನ್ನು ನಾವು ಆಯ್ಕೆ ಮಾಡಿದ ಸದಸ್ಯರುಗಳು ಬೆಳೆಸಿಕೊಳ್ಳಲಿ ಎಂದು ಹಾರೈಸುತ್ತೇನೆ. ಯಾರೊಬ್ಬರ ಮುಖಕ್ಕೆ ಉದ್ದೇಶಪೂರ್ವಕವಾಗಿ ಮತ್ತು ಅಕಾರಣವಾಗಿ ಮಸಿ ಬಳಿಯುವ ಯತ್ನ ಸಾರ್ವಜನಿಕರಿಗಾಗಲೀ ಯಾವುದೇ ಪತ್ರಿಕೆಯವರಿಗಾಗಲೀ ಸಲ್ಲದು.

**—ಎಂ. ಆರ್. ಕಣ್ಣನ್,**
ಕೊಪ್ಪ.

ಸಂಪಾದಕ, ಮುದ್ರಕ ಮತ್ತು. ಪ್ರಕಾಶಕ ಸಿರಿಮನೆ ನಾಗರಾಜ್, ಅಚ್ಚು: ದೀವಟಿಗೆ ಅಚ್ಚುಕೂಟ, ಕೊಪ್ಪ.